# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 35 (60)
ಸದಸ್ಯರ ಹೆಸರು : ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 21-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರಿ ಶಾಲೆಗಳನ್ನು ಜಾಗತಿಕ ಮಟ್ಟಕ್ಕೆ ಕೊಂಡೊಯ್ಯುವ ಸಂಬಂಧ ಕನ್ನಡ ಮತ್ತು ಆಂಗ್ಲ ಭಾಷೆಯ ಬೋಧನೆ ನೀಡುವ ಹೊಸ ಚಿಂತನೆಯನ್ನು ಸರ್ಕಾರ ಆಲೋಚಿಸಿದೆಯೇ; | ಹೌದು, ಆಲೋಚಿಸಲಾಗಿದೆ. |
| ಆ. | ಹಾಗಿದ್ದಲ್ಲಿ, ಇದರಿಂದ ಕನ್ನಡ ಬೋಧನೆಯನ್ನು ನಿರ್ಲಕ್ಷಿಸಿದಂತಾಗುವುದಿಲ್ಲವೇ; ಕನ್ನಡ ಭಾಷೆಯ ಬೋಧನೆಯೊಂದಿಗೆ ಆಂಗ್ಲ ಭಾಷೆಯನ್ನು ಬೋಧಿಸುವ ಸಂಬಂಧ ಅನುಸರಿಸಲಾಗುವ ಮಾರ್ಗೋಪಾಯಗಳೇನು? | ಕನ್ನಡ ಭಾಷೆಯನ್ನು ನಿರ್ಲಕ್ಷಿಸಲಾಗುತ್ತಿಲ್ಲ ಕಾರಣ, ಸರ್ಕಾರಿ ಶಾಲೆಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಬೋಧಿಸುವ ಸಂಬಂಧ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಗುರುಚೇತನದ ಮಾಡ್ಯೂಲ್‌ಗಳನ್ನು ಆಯ್ಕೆ ಮಾಡಿಕೊಳ್ಳುವ ಶಿಕ್ಷಕರಿಗೆ ತರಬೇತಿಯನ್ನು ಹಮ್ಮಿಕೊಳ್ಳಲಾಗುತ್ತಿದೆ. ಆಂಗ್ಲ ಭಾಷೆಯ ಬೋಧನೆ ಮಾಡಲು ಪ್ರಾಥಮಿಕ/ಹಿರಿಯ ಪ್ರಾಥಮಿಕ ಶಿಕ್ಷಕರಿಗೆ ಈ ಕೆಳಕಂಡ ತರಬೇತಿಯನ್ನು ನೀಡಲಾಗುತ್ತಿದೆ.<br>1. EMTIP (English Medium Teachers Induction Programme) 1 & 2 1001 ಆಂಗ್ಲ ಮಾಧ್ಯಮ ತರಗತಿಯಲ್ಲಿ ಆಂಗ್ಲ ಭಾಷೆಯಲ್ಲಿ ಬೋಧಿಸಲು (ಓರಿಯೆಂಟೇಷನ್ ತರಬೇತಿ) ತರಬೇತಿಯನ್ನು ನೀಡಲಾಗಿದೆ.<br>1ನೇ ತರಗತಿ–15 ದಿನಗಳು,<br>2ನೇ ತರಗತಿಯ ಶಿಕ್ಷಕರಿಗೆ –06 ದಿನಗಳು<br>2. ELEP Basic and Advanced. (English Langauage Enhancement Programme) ಪ್ರಾಥಮಿಕ ಶಾಲೆಗಳಲ್ಲಿ ಆಂಗ್ಲ ಭಾಷೆಯನ್ನು ಬೋಧಿಸುವ ಶಿಕ್ಷಕರಿಗೆ 15 ದಿನಗಳ ಬೇಸಿಕ್ ತರಬೇತಿಯನ್ನು ಹಾಗೂ 20 ದಿನಗಳ ತರಬೇತಿಯನ್ನು ನೀಡಲಾಗುತ್ತಿದೆ.<br>3. PDP-Basic : 2020–21ನೇ ಸಾಲಿನ ಹೊಸ ಕಾರ್ಯಕ್ರಮವಾಗಿರುತ್ತದೆ. ಪ್ರಾಥಮಿಕ ಶಾಲೆಯಲ್ಲಿನ 1 ರಿಂದ 5 ನೇ ತರಗತಿಯಲ್ಲಿ ಬೋಧನೆಯಲ್ಲಿ ತೊಡಗಿರುವ ಶಿಕ್ಷಕರಿಗೆ, ಈ ಕಾರ್ಯಕ್ರಮದಡಿಯಲ್ಲಿ RIESI-Bangalore ಸಂಸ್ಥೆಯವರಿಂದಲೇ ನೇರವಾಗಿ 15 ದಿನಗಳ ತರಬೇತಿಯನ್ನು |

| | | |
|---|---|---|
| | | ನೀಡುವುದು ಹಾಗೂ ತರಬೇತಿಯ ನಂತರದಲ್ಲಿ ಆನ್‌ಲೈನ್ ಮೂಲಕ ಬೋಧನೆಯಲ್ಲಿನ ಸಮಸ್ಯೆಗಳನ್ನು ಬಗೆಹರಿಸಲು ಕ್ರಮವಹಿಸುವುದಾಗಿದೆ. ಈ ಕಾರ್ಯಕ್ರಮವನ್ನು ಈ ವರ್ಷದಿಂದ ಅನುಷ್ಠಾನ ಮಾಡಲಾಗುತ್ತಿದೆ. ಪ್ರತಿ ಜಿಲ್ಲೆಯಿಂದ 12 ಶಿಕ್ಷಕರನ್ನು ಈ ತರಬೇತಿಗೆ ಆಯ್ಕೆ ಮಾಡಲಾಗಿದೆ (408 ಶಿಕ್ಷಕರಿಗೆ ತರಬೇತಿ ನೀಡುವ ಗುರಿ ಇರುತ್ತದೆ.)<br>4. RIESI-Bangalore ಸಂಸ್ಥೆಯವರು CELT (Certificate course in English Language Teaching) ಪ್ರಾಥಮಿಕ ಹಾಗೂ ಪ್ರೌಢಶಾಲೆಯ ತಲಾ 30 ಶಿಕ್ಷಕರುಗೆ 30 ದಿನಗಳ ಕಾಲ ಸನಿವಾಸ ತರಬೇತಿಯನ್ನು ಪ್ರತಿ ವರ್ಷ ನೀಡಲಾಗುತ್ತಿದೆ.<br>5. ಅಲ್ಲದೆ, ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳನ್ನು ವೈಜ್ಞಾನಿಕವಾಗಿ ಕಲಿಸಲು ಅನುಕೂಲವಾಗುವಂತೆ ರಾಜ್ಯದ ನಾಲ್ಕು ಕಂದಾಯ ವಿಭಾಗ ಕೇಂದ್ರಗಳಲ್ಲಿ ಆಲೂರು ವೆಂಕಟರಾವ್ ಭಾಷಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಈ ಕೇಂದ್ರಗಳನ್ನು ಸುಸಜ್ಜಿತಗೊಳಿಸುವ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

**ಇಪಿ 28 ಪಿಎಂಎ 2020**

S. S—

**(ಎಸ್. ಸುರೇಶ್ ಕುಮಾರ್)**

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.